# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2024
ಸದಸ್ಯರ ಹೆಸರು : ಶ್ರೀ ಎನ್ ರವಿಕುಮಾರ್, (ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ : 17.03.2022
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಲಂಚದ ಬೇಡಿಕೆ ಇಟ್ಟಿದ್ದ ಐಪಿಎಸ್ ಅಧಿಕಾರಿಗಳೂ ಸೇರಿದಂತೆ, ಡಿವೈಎಸ್‌ಪಿ ಪೊಲೀಸ್ ಮತ್ತು ಇತರ ಕೆಳಹಂತದ ಅಧಿಕಾರಿಗಳ ಮೇಲಿನ ದೂರಿನಲ್ಲಿ ಇನ್ಸ್‌ಪೆಕ್ಟರ್ ಮತ್ತು ಕೆಳ ಹಂತದ ಸಿಬ್ಬಂದಿಗಳನ್ನು ಮಾತ್ರವೇ ಅಮಾನತ್ತು ಮಾಡಿದ್ದು, ಅದೇ ರೀತಿಯ ಆರೋಪ ಹೊತ್ತಿರುವ ಪೊಲೀಸ್ ಹೆಚ್ಚುವರಿ ಮಹಾ ನಿರ್ದೇಶಕರು, ಪೊಲೀಸ್ ಅಧೀಕ್ಷಕರ ಮೇಲೆ ಕ್ರಮ ಕೈಗೊಳ್ಳದಿರಲು ಕಾರಣವೇನು; | ಉಪ ಪ್ರಶ್ನೆ (ಆ) ರಲ್ಲಿ ಮಾಹಿತಿಯನ್ನು ಒದಗಿಸಲಾಗಿದೆ. |
| ಆ) | ಬೆಂಗಳೂರು ಜಿಲ್ಲೆಯ ವಿಜಯಪುರ ಠಾಣಾ ವ್ಯಾಪ್ತಿಯಲ್ಲಿ ಕ್ರಶರ್ ಮಾಲೀಕರಿಂದ 55 ಲಕ್ಷಕ್ಕೂ ಮೀರಿ ಲಂಚವನ್ನು ಅಪೇಕ್ಷಿಸಿ ಲಂಚದ ಮುಂಗಡವನ್ನು ಪಡೆದಿರುವ ಅಧಿಕಾರಿಗಳಿಗೆ ವಾಯ್ಸ್ ರೆಕಾರ್ಡ್‌ನಲ್ಲಿ ಸ್ಪಷ್ಟವಾಗಿ ಐಪಿಎಸ್ ಅಧಿಕಾರಿಗಳ ಹೆಸರನ್ನು ಹೇಳಿದರೂ ಅವರನ್ನು ಅಮಾನತ್ತುಗೊಳಿಸದಿರುವುದು ಕಾನೂನಿನ ಮುಂದೆ ಎಲ್ಲರೂ ಸಮಾನರು ಎಂಬ ಸಂವಿಧಾನದ ಆಶಯವನ್ನು ಧಿಕ್ಕರಿಸಿದಂತಾಗಿದ್ದು, ಈ ಕುರಿತು ಸರ್ಕಾರದ ನಿಲುವೇನು; | ಬೆಂಗಳೂರು ಜಿಲ್ಲೆಯ ವಿಜಯಪುರ ಠಾಣಾ ವ್ಯಾಪ್ತಿಯಲ್ಲಿ ಕ್ರಶರ್ ಮಾಲೀಕರಿಂದ 55 ಲಕ್ಷಕ್ಕೂ ಮೀರಿ ಲಂಚವನ್ನು ಅಪೇಕ್ಷಿಸಿ ಲಂಚದ ಮುಂಗಡವನ್ನು ಪಡೆದಿರುವ ಬಗ್ಗೆ ಯಾವುದೇ ದೂರು ಅರ್ಜಿಗಳು ಸ್ವೀಕೃತವಾಗಿಲ್ಲ.<br><br>ಆದರೆ, ಶ್ರೀ ಆರ್ ಮಂಜುನಾಥ್ ಅತ್ತಿಬೆಲೆ ಟೌನ್, ಬೆಂಗಳೂರು ಜಿಲ್ಲೆ ರವರು ಐಜಿಪಿ, ಕೇಂದ್ರ ವಲಯ ಇವರಿಗೆ ಸಲ್ಲಿಸಿರುವ ದೂರು ಅರ್ಜಿಯಲ್ಲಿ ಈ ಕೆಳಕಂಡ ಅಧಿಕಾರಿಗಳ ವಿರುದ್ಧ ಆರೋಪಗಳನ್ನು ಮಾಡಿರುತ್ತಾರೆ.<br><br>1. *ಶ್ರೀ ಟಿ ಶ್ರೀನಿವಾಸ್, ಸಿಪಿಐ ವಿಜಯಪುರ ವೃತ್ತ ಬೆಂಗಳೂರು ಜಿಲ್ಲೆ.*<br>2. *ಶ್ರೀಮತಿ ಎನ್ ಶುಭ ಎಎಸ್‌ಐ.*<br>3. *ಶ್ರೀ ಕೆ.ಜಿ. ಅನಿತ, ಎಎಸ್‌ಐ*<br>ಐಜಿಪಿ, ಕೇಂದ್ರ ವಲಯ, ಬೆಂಗಳೂರು ರವರು ಸದರಿ ದೂರು ಅರ್ಜಿಯನ್ನು ಹಾಗೂ ಸಿಡಿಆರ್ ಗಳನ್ನು ವಿಚಾರಣೆಗೊಳಪಡಿಸಿದ್ದು, ಆರೋಪಿತ ಅಧಿಕಾರಿಗಳು ಮತ್ತು ದೂರು |

| | | |
|---|---|---|
| | | ಅರ್ಜಿದಾರರು ನಿಕಟ ಸಂಪರ್ಕದಲ್ಲಿರುವುದು ಹಾಗೂ ಅರ್ಜಿದಾರರಿಗೆ ಸಹಾಯ ಮಾಡುವ ನಿಟ್ಟಿನಲ್ಲಿ ಮಾತುಕತೆ ನಡೆಸಿರುವುದು ಮತ್ತು ಅರ್ಜಿದಾರರಿಗೆ ಸಹಾಯ ಮಾಡುವುದಾಗಿ ನಂಬಿಸಿ ರೂ. 5.00 ಲಕ್ಷಗಳನ್ನು ಪಡೆದಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಶ್ರೀ ಟಿ ಶ್ರೀನಿವಾಸ್, ಸಿಪಿಐ, ವಿಜಯಪುರ ವೃತ್ತ ರವರನ್ನು ಸೇವೆಯಿಂದ ಅಮಾನತ್ತುಗೊಳಿಸಿ ಹಾಗೂ ಇಬ್ಬರು ಎಎಸ್ಐ ಗಳಾದ ಶ್ರೀಮತಿ ಶುಭ ಮತ್ತು ಕೆ.ಜಿ. ಅನಿತಾ ಇವರ ವಿರುದ್ಧ ಇಲಾಖಾ ಶಿಸ್ತಿನ ಕ್ರಮ ಕೈಗೊಂಡಿರುತ್ತಾರೆ.<br><br>ಈ ವಿಚಾರಣೆಯಲ್ಲಿ ಶ್ರೀ ರವಿ ಡಿ ಚೆನ್ನಣ್ಣನವರ್ ಐಪಿಎಸ್ ಈ, ಹಿಂದಿನ ಪೊಲೀಸ್ ಅಧೀಕ್ಷಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಪಾತ್ರ ಕಂಡು ಬರುವುದಿಲ್ಲವೆಂದು ಐಜಿಪಿ ಕೇಂದ್ರ ವಲಯ ವರದಿ ಮಾಡಿರುತ್ತಾರೆ. |
| ಇ) | ಲಂಚ ಪಡೆದ ಐಪಿಎಸ್ ಅಧಿಕಾರಿಗಳ ಕುರಿತು ಕೇಂದ್ರ ಸರ್ಕಾರಕ್ಕೆ ಪತ್ರ ಬರೆಯಲಾಗಿದೆಯೇ; ಇಲ್ಲವಾದ್ದಲ್ಲಿ, ಯಾವಾಗ ಪತ್ರ ಬರೆಯಲಾಗುವುದು; ಈ ಅಧಿಕಾರಿಗಳನ್ನು ಅಮಾನತ್ತುಗೊಳಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ? | ಅನ್ವಯಿಸುವುದಿಲ್ಲ. |

ಸಂಖ್ಯೆ: ಇ-ಸಿಆಸುಇ 90 ಎಸ್‌ಪಿಎಸ್ 2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ